# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ. ಯು. ಬಿ.ವೆಂಕಟೇಶ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 199

ಉತ್ತರಿಸಬೇಕಾದ ದಿನಾಂಕ : 14.12.2021

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರದ ಹನುಮಂತ ನಗರದಲ್ಲಿರುವ ವಶಿಷ್ಠ ಸೌಹಾರ್ದ ಸಹಕಾರ ಬ್ಯಾಂಕ್ ನಿಯಮಿತದಲ್ಲಿ ಠೇವಣಿದಾರರಿಗೆ ವಂಚನೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ. |
| ಆ | ಬಂದಿದ್ದಲ್ಲಿ, ಈ ಸಂಬಂಧ ಸರ್ಕಾರದ ಕೈಗೊಂಡಿರುವ ಕಾನೂನು ಕ್ರಮಗಳೇನು; | ಈ ಸಂಬಂಧ ಸರ್ಕಾರ ಕೆಳಕಂಡಂತೆ ಕ್ರಮವಿಡಲಾಗಿದೆ. |
| ಇ | ಈ ಬ್ಯಾಂಕ್‌ನಲ್ಲಿರುವ ಸದಸ್ಯರ ಸಂಖ್ಯೆ ಎಷ್ಟು; ಅವರುಗಳಲ್ಲಿ ಠೇವಣಿಯಿರಿಸಿರುವ ಸಂಖ್ಯೆ ಎಷ್ಟು; ವಂಚನೆಗೊಳಗಾಗಿರುವವರ ಸಂಖ್ಯೆ ಎಷ್ಟು; ವಂಚನೆಗೊಳಗಾಗಿರುವವರ ಹಿತರಕ್ಷಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು: | 1. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರು ಸಹಕಾರಿಯಲ್ಲಿ ಜರುಗಿದ ಹಣಕಾಸು ದುರುಪಯೋಗ ಹಾಗೂ ವಂಚನೆ ಕುರಿತಂತೆ ಕರ್ನಾಟಕ ಸೌಹಾರ್ದ ಅಧಿನಿಯಮ 1997ರ ಪ್ರಕರಣ 35ರಡಿ ಶಾಸನಬದ್ಧ ವಿಚಾರಣೆಗೆ ಹಿರಿಯ ನಿರೀಕ್ಷಕರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ದಿನಾಂಕ:02.07.2021 ರಂದು ಆದೇಶಿಸಿದ್ದು, ವಿಚಾರಣೆ ಪ್ರಗತಿಯಲ್ಲಿರುತ್ತದೆ.<br>2. ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮದ ಕಲಂ 25(1))(ಎಫ್)ರಡಿ ಸಹಕಾರಿಯ ಆಡಳಿತ ಮಂಡಳಿಯ ನಿರ್ದೇಶಕರನ್ನು ಅನರ್ಹಗೊಳಿಸಿ ದಿನಾಂಕ:03.08.2021 ರಂದು ಸಂಯುಕ್ತ ಸಹಕಾರಿಯ ಉಪ ಪ್ರಧಾನ ವ್ಯವಸ್ಥಾಪಕರನ್ನು ವಿಶೇಷಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.<br>3. ನಿರ್ದೇಶಕರು, ಲೆಕ್ಕ ಪರಿಶೋಧನಾ ಇಲಾಖೆ, ಬೆಂಗಳೂರು ಇವರು ಸಹಕಾರಿಯ 2015-16 ರಿಂದ 2019-20ನೇ ಸಾಲಿನ ದೋಷಪೂರಿತ ಲೆಕ್ಕ ಪರಿಶೋಧನೆಯನ್ನು ತಿರಸ್ಕರಿಸಿ, ಮತ್ತೆ ಹೊಸದಾಗಿ ಲೆಕ್ಕಪರಿಶೋಧನೆಗೆ ಆದೇಶಿಸಿರುತ್ತಾರೆ,<br>4. ಸರ್ಕಾರವು ಸಹಕಾರಿಯ 2013-14 ಮತ್ತು 2014-15ನೇ ಸಾಲುಗಳ ಮರು ಲೆಕ್ಕಪರಿಶೋಧನೆಗೆ ಆದೇಶಿಸಿರುತ್ತದೆ. |

| | | |
|---|---|---|
| | | ಸಹಕಾರಿಯಲ್ಲಿ ಒಟ್ಟು ಸದಸ್ಯರ ಸಂಖ್ಯೆ 5168 ಇರುತ್ತದೆ. ಈ ಸಹಕಾರಿಯಲ್ಲಿ 10,922 ಠೇವಣಿ ಖಾತೆಗಳಿದ್ದು, ರೂ.291.50 ಕೋಟಿಗಳಷ್ಟು ಠೇವಣಿ ಮೊತ್ತ ಹೊಂದಿರುತ್ತದೆ.<br>ಸರ್ಕಾರವು ಮರು ಲೆಕ್ಕಪರಿಶೋಧನೆಗೆ ಆದೇಶಿಸಿದ್ದು ಹಾಗೂ ವಂಚನೆ ಮತ್ತು ಹಣ ದುರುಪಯೋಗ ಕುರಿತಂತೆ ಇಲಾಖಾ ವತಿಯಿಂದಲೂ ವಿಚಾರಣೆಗೆ ಆದೇಶಿಸಿದ್ದು, ಈ ಎರಡೂ ವರದಿಗಳು ಸ್ವೀಕೃತವಾದ ನಂತರ ವಂಚನೆಗೊಳಗಾಗಿರುವ ನಿಖರವಾದ ಮಾಹಿತಿ ಲಭ್ಯವಾಗುವ ಸಾಧ್ಯತೆ ಇರುತ್ತದೆ. |

**ಕಡತ ಸಂಖ್ಯೆ ಸಿಒ 95 ಸಿಆರ್‌ಸಿ 2021**

**(ಎಸ್. ಟಿ. ಸೋಮಶೇಖರ್)**
ಸಹಕಾರ ಸಚಿವರು